# ೨೦೧೬ರ ರಾಷ್ಟ್ರೀಯ ಕರಡು ಶಿಕ್ಷಣ ನೀತಿಯ ಪ್ರಸ್ತಾವದಲ್ಲಿನ ಕೆಲವು ವಿಷಯಗಳ ಬಗ್ಗೆ ಚರ್ಚೆ

ಅರ್ಚನಾ ಮೆಹೆಂದಳೆಮತ್ತು ರಾಹುಲ್ ಮುಖೋಪಾಧ್ಯಾಯ

ಎರಡು ಸಾವಿರದ ಹದಿನೈದು-ಹದಿನಾರರ ತೀವ್ರಗತಿಯ ವ್ಯಾಪಕ ಸಮಾಲೋಚನೆಗಳ ಬಳಿಕ ಕಳೆದ ವರ್ಷದ ಕೊನೆಗೆ ನೂತನ ರಾಷ್ಟ್ರೀಯ ಶಿಕ್ಷಣ ನೀತಿಗೊಂದು (National Policy on Education) ಅಂತಿಮ ರೂಪ ಕೊಡುವ ಪ್ರಕ್ರಿಯೆಯ ಗತಿ ಮಂದವಾಯಿತು. ಮಾನವ ಸಂಪನ್ಮೂಲ ಸಚಿವಾಲಯವು ನೀತಿಯ ಕರಡನ್ನು ಸಜ್ಜುಗೊಳಿಸಲು ಮಂಡಳಿಯೊಂದನ್ನು ಸ್ಥಾಪಿಸುವುದಾಗಿ ಘೋಷಿಸಿತು. ಟಿ. ಎಸ್.ಆರ್. ಸುಬ್ರಹ್ಮಣ್ಯಮ್ ಮಂಡಳಿಯ ವರದಿಯನ್ನು ಕೇವಲ "ಒಳಸುರಿ" ಯಾಗಿ (input) ಬಳಸಿಕೊಳ್ಳುವ ಹೇಳಿಕೆ ನೀಡಿತು. ಆದರೆ ಸಚಿವಾಲಯದ ಅಧಿಕೃತ ಜಾಲತಾಣವು ನೂತನ ಮಂಡಳಿಯ ಸದಸ್ಯರ ಪಟ್ಟಿಯನ್ನಾಗಲೀ, ತಯಾರಿಯಲ್ಲಿರುವ ನೀತಿಯ ಯಾವುದೇ ಕರಡನ್ನಾಗಲೀ ಪ್ರಕಟಿಸಲಿಲ್ಲ. ಹೀಗಾಗಿ, ಈ ಲೇಖನದಲ್ಲಿ ನಾವು ಮಾನವ ಸಂಪನ್ಮೂಲ ಸಚಿವಾಲಯವು ಬಿಡುಗಡೆಗೊಳಿಸಿದ "೨೦೧೬ರ ರಾಷ್ಟ್ರೀಯ ಕರಡು ಶಿಕ್ಷಣ ನೀತಿಗೆ ಕೆಲವು ಒಳಸುರಿಗಳು" (Some Inputs for Draft National Education Policy 2016) ಎಂಬ ಟಿಪ್ಪಣಿರೂಪದ ಕಡತದಲ್ಲಿನ ಕೆಲವು ಮುಖ್ಯ ಅಂಶಗಳನ್ನು ಚರ್ಚಿಸಲಿದ್ದು, ಉದ್ದೇಶಿತ ಕರಾರುಗಳ ಮೇಲೆ ಪ್ರಭಾವ ಬೀರುವ ಕೆಲವು ವಿಚಾರಗಳತ್ತ ಓದುಗರ ಗಮನ ಸೆಳೆಯಲಿದ್ದೇವೆ.

೧. "2000ನೇ ಇಸವಿಯಿಂದ ದೇಶದಲ್ಲಿ ಶಾಲೆಯಿಂದ ಹೊರಗುಳಿಯುವ ೬ರಿಂದ ೧೪ ವಯಸ್ಸಿನ ಮಕ್ಕಳ ಶೇಕಡಾವಾರು ಸಂಖ್ಯೆಯು ಗಣನೀಯವಾಗಿ ಇಳಿಕೆಯಾಗಿದೆ. ಆದಾಗ್ಯೂ, ಶಾಲೆಯಿಂದ ಹೊರಗುಳಿಯುವ ಮಕ್ಕಳ ಒಟ್ಟು ಸಂಖ್ಯೆ ದೊಡ್ಡದಿದೆ. ಪ್ರಾಥಮಿಕ ಶಾಲೆಗೆ ಹೋಲಿಸಿದಾಗ ಹಿರಿಯ ಪ್ರಾಥಮಿಕ ಹಾಗು ಮಾಧ್ಯಮಿಕ ಶಾಲೆಗಳಲ್ಲಿ ಕಾಣುವ ಕಡಿಮೆ ಪ್ರಮಾಣದ ದಾಖಲಾತಿಯೂ ಚಿಂತೆಗೀಡುಮಾಡುವ ಸಂಗತಿಯಾಗಿದೆ. ಸಾರ್ವತ್ರಿಕ ಮಾಧ್ಯಮಿಕ ಶಿಕ್ಷಣವನ್ನು ಸಾಧಿಸಲು ವಿದ್ಯಾರ್ಥಿಗಳು ಪ್ರಾಥಮಿಕ ಹಂತದಿಂದ ಮಾಧ್ಯಮಿಕ ಹಂತಕ್ಕೆ ಹಾಗು ಮಾಧ್ಯಮಿಕ ಹಂತದಿಂದ ಪ್ರೌಢಶಾಲೆ ಹಾಗು ಉನ್ನತ ಶಿಕ್ಷಣಕ್ಕೆ ವಿದ್ಯಾರ್ಥಿಗಳ ಮೇಲ್ಮುಖ ಪರಿವರ್ತನೆ/ ಚಲನೆಯನ್ನು (upward transition/mobility) ಸಾಧಿಸುವುದು ಇನ್ನೂ ಸವಾಲಾಗಿಯೇ ಉಳಿದಿದೆ" (ಪು. ೭).
ಚರ್ಚೆ: ಸವಾಲನ್ನು "ವಿದ್ಯಾರ್ಥಿಗಳ ಮೇಲ್ಮುಖ ಪರಿವರ್ತನೆ/ಚಲನೆ" ಎಂದು ವ್ಯಾಖ್ಯಾನಿಸುವುದು ವಿವಿಧ ಮಕ್ಕಳ ತಂಡಗಳಿಗೆ ಹಾಗು ವಿವಿಧ ಶೈಕ್ಷಣಿಕ ಹಂತಗಳಿಗೆ ಇರುವ ಹೊರಗಿಡುವಿಕೆಯ ಸ್ವರೂಪದಲ್ಲಿನ ವೈವಿಧ್ಯವನ್ನು ನಿರ್ಲಕ್ಷ್ಯ ಮಾಡುವಂತೆ ತೋರುತ್ತದೆ. (ನಿಷೇಧದ ವಲಯಗಳು: ಗೋವಿಂದ ಮತ್ತು ಬಂದೋಪಾಧ್ಯಾಯ, ೨೦೧೧). ಈ ರೀತಿಯ ನಿರೂಪಣೆಯಲ್ಲಿ ವ್ಯವಸ್ಥಿತ ನಿರ್ಬಂಧ (ಮುಂತಳ್ಳುವ ಅಂಶಗಳಿಗೆ ಸಂಬಂಧಿಸಿದಂತೆ) ಹಾಗು ವಿವಿಧ ರೂಪದ ಅನನುಕೂಲತೆಗಳು (ಭೌಗೋಳಿಕ ಹಾಗು ಜಾತಿ/ಧರ್ಮಾಧರಿತ ಸಾಮಾಜಿಕ ವರ್ಗೀಕರಣಗಳು) ಕಡೆಗಣಿಸಲ್ಪಡುತ್ತವೆ. ೨೦೦೯ರ ಮುಕ್ತ ಹಾಗು ಕಡ್ಡಾಯ ಶಿಕ್ಷಣಕ್ಕಾಗಿ ಮಕ್ಕಳ ಹಕ್ಕು ಕಾಯ್ದೆಯು (Right of Children to Free and Compulsory Education Act, 2009 -RTE Act) ಕಟ್ಟುಪಾಡಿಗೊಳಪಡುವ ಶಾಸನಾತ್ಮಕ ಚೌಕಟ್ಟನ್ನು ಹೊಂದಿದೆಯಾದರೂ ಸೌಲಭ್ಯವಂಚಿತ ಮಕ್ಕಳಿಗೆ "ಸಮನ್ವಯ ಶಿಕ್ಷಣ"ವನ್ನು ಅತ್ಯಂತ ಅಸಮಾನತೆಯ ಷರತ್ತುಗಳ ಮೇಲೆ ನೀಡಲಾಗುತ್ತಿದೆ ಎಂದು ಇತ್ತೀಚಿನ ಅಧ್ಯಯನಗಳು ತೋರಿಸುತ್ತವೆ. (ಡಯರ್, ೨೦೧೩) ಶಾಲೆಗೆ ಸೇರದ ಅಥವಾ ಪ್ರಾಥಮಿಕ ಶಿಕ್ಷಣವನ್ನು ಪೂರ್ಣಗೊಳಿಸದ ಮಕ್ಕಳಿಗೆ ವಿಶೇಷ ಸವಲತ್ತುಗಳನ್ನು ನೀಡುವ ಶಿಕ್ಷಣ ಹಕ್ಕು ಕಾಯ್ದೆಯ ನ್ಯಾಯಿಕ ನಿಬಂಧನೆಗೆ (ಅಧಿನಿಯಮ ೪) ಹಾಗು ವಿಶೇಷ ತರಬೇತಿಯ ಮೂಲಕ ವಯಸ್ಸಿಗೆ ತಕ್ಕ ದಾಖಲಾತಿಯ ಅವಕಾಶಗಳಿಗೆ ವಿಶಿಷ್ಟವಾಗಿ ಒತ್ತು ನೀಡಬೇಕಾಗುತ್ತದೆ.

೨. "ಶಾಲಾ ಶಿಕ್ಷಣವನ್ನು ಬಾಧಿಸುತ್ತಿರುವ ಅತಿದೊಡ್ಡ ಸವಾಲೆಂದರೆ ಅದು ವಿದ್ಯಾರ್ಥಿಗಳ ಅತೃಪ್ತಿಕರ ಕಲಿಕಾ ಹಂತಕ್ಕೆಸಂಬಂಧಿಸಿದ್ದಾಗಿದೆ. III, V, VIII ಮತ್ತು Xನೇ ತರಗತಿಗಳನ್ನು ಗಮನದಲ್ಲಿರಿಸಿ ನಡೆಸಿದ "ರಾಷ್ಟ್ರೀಯ ಸಾಧನೆ

ಸಮೀಕ್ಷೆ"ಗಳ (NAS) ತೀರ್ಮಾನವು ಗಣನೀಯ ಪ್ರಮಾಣದ ವಿದ್ಯಾರ್ಥಿಗಳಲ್ಲಿ ಕಲಿಕೆಯ ಮಟ್ಟವು ನಿರೀಕ್ಷಿತ ಕಲಿಕಾಮಟ್ಟವನ್ನು ತಲುಪದೇ ಇರುವುದನ್ನು ಸೂಚಿಸುತ್ತದೆ. ಪ್ರಾಥಮಿಕ ಹಾಗು ಹಿರಿಯ ಪ್ರಾಥಮಿಕ ಶಾಲಾ ಹಂತದ ಸಾಧಾರಣ ಗುಣಮಟ್ಟದ ಕಲಿಕೆಯು ವಿದ್ಯಾರ್ಥಿಯ ಮಾಧ್ಯಮಿಕ ಹಂತದ ಕಲಿಕೆಗೆ ತೊಡರಾಗುತ್ತದೆ. ಕಳಪೆ ಗುಣಮಟ್ಟದ ಮಾಧ್ಯಮಿಕ ಶಾಲಾ ಹಂತದ ಕಲಿಕೆಯ ದುಷ್ಪರಿಣಾಮವು ಕಾಲೇಜು/ವಿಶ್ವವಿದ್ಯಾಲಯಗಳ ಹಂತವನ್ನು ತಟ್ಟಿರುವುದರಿಂದ ಉನ್ನತ ಶಿಕ್ಷಣ ವಲಯದಲ್ಲಿ ಕಲಿಕಾ-ಫಲಿತಾಂಶಗಳು ಕಳಪೆಯಾಗಿರುತ್ತವೆ.

ಶಾಲಾಶಿಕ್ಷಣದ ಗುಣಮಟ್ಟವು ಅತೃಪ್ತಿಕರವಾಗಿರುವುದಕ್ಕೆ ಅನೇಕ ಅಂಶಗಳು ಕಾರಣವಾಗಿವೆ. ಅವುಗಳಲ್ಲಿ ಕೆಲವೆಂದರೆ: ನಿಗದಿಪಡಿಸಲಾದ ಮಾನದಂಡಗಳನ್ನು ಬಹಳಷ್ಟು ಶಾಲೆಗಳು ಪಾಲಿಸದೇ ಇರುವುದು, ಮಕ್ಕಳು ಮತ್ತು ಶಿಕ್ಷಕರ ಗೈರುಹಾಜರಿ, ಶಿಕ್ಷಕರ ಪ್ರೇರಣೆ ಹಾಗು ತರಬೇತಿಗಳಲ್ಲಿ ಗಂಭೀರ ಬಿರುಕುಗಳು ಹಾಗು ತತ್ಪರಿಣಾಮವಾದ ಶಿಕ್ಷಕರ ಗುಣಮಟ್ಟ ಹಾಗು ಕಾರ್ಯನಿರ್ವಹಣೆಗೆ ಸಂಬಂಧಿಸಿದ ನ್ಯೂನತೆಗಳು, ಶಿಕ್ಷಣದಲ್ಲಿ ಮಾಹಿತಿ ಹಾಗು ಸಂಪರ್ಕ ತಂತ್ರಜ್ಞಾನದ ಬಳಕೆಯಲ್ಲಿ ಮಂದಗತಿಯ ಪ್ರಗತಿ, ಕಾರ್ಯಪಡೆಯ ನಿರ್ವಹಣೆಯು ನಿರೀಕ್ಷಿತ ಮಟ್ಟಕ್ಕಿಂತ ಕಳಪೆಯಾಗಿರುವುದು, ಕಾರ್ಯನಿರ್ವಹಣೆಯ ಮೇಲ್ವಿಚಾರಣೆ ವಿಚಾರವಾಗಿ ಗಮನಕೊಡುವುದರಲ್ಲಿ ಕೊರತೆ, ಇತ್ಯಾದಿ. ಸರ್ಕಾರಿ ವ್ಯವಸ್ಥೆಯು ತನ್ನ ಶಾಲೆಗಳಲ್ಲಿ ಉತ್ತಮ ಗುಣಮಟ್ಟದ ಶಿಕ್ಷಣವನ್ನು ನೀಡುವಲ್ಲಿ ಸೋತಿರುವುದೆಂದು ಗ್ರಹಿಸಲಾಗುವುದರಿಂದ ಖಾಸಗಿ ಶಾಲೆಗಳು ಬಹು ದೊಡ್ಡ ಪ್ರಮಾಣದಲ್ಲಿ ಶಿಕ್ಷಣರಂಗಕ್ಕೆ ಲಗ್ಗೆ ಹಾಕುವಂತೆ ಆಗಿದೆ. ಇವುಗಳಲ್ಲಿ ಕೂಡ ಹೆಚ್ಚಿನವು ಸೌಲಭ್ಯಗಳ ಕೊರತೆಯಿಂದ, ಕಲಿಕಾ ವಾತಾವರಣದ ನಿರ್ಮಾಣದ ಅಭಾವದಿಂದ ಹಾಗು ಸಮರ್ಥ ಶಿಕ್ಷಕರ ನೇಮಕಾತಿಯಿಲ್ಲದೆ ಬಳಲುತ್ತಿವೆ" (ಪು. ೮).

ಚರ್ಚೆ:

ಶಿಕ್ಷಣದ ಗುಣಮಟ್ಟದ ಕುರಿತ ಅರಿವು ತುಂಬಾ ಸೀಮಿತವಾದಂತೆ ತೋರುತ್ತಿದ್ದು, ಗಮನವು ಪ್ರಾಥಮಿಕವಾಗಿ ಕಲಿಕಾ-ಫಲಿತಾಂಶಗಳ ಎಡೆಗೆ ಕೇಂದ್ರೀಕೃತವಾಗಿದೆ. ಶಿಕ್ಷಣ ಹಕ್ಕು ಕಾಯ್ದೆಯಲ್ಲೂ "ಗುಣಮಟ್ಟ"ವನ್ನು ಅಸಮರ್ಪಕವಾಗಿ ಸಮಾಲೋಚಿಸಲಾಗಿದೆ ಎಂಬುದನ್ನು ಪರಿಣತರು ಎತ್ತಿ ತೋರಿಸಿದ್ದಾರೆ. ಗುಣಮಟ್ಟವನ್ನು ಅರ್ಥೈಸಿಕೊಳ್ಳಲು ಈ ಕಾಯ್ದೆಯು ಶಾಲಾ ಸಂಪನ್ಮೂಲಗಳ, ಮೂಲಸೌಕರ್ಯಗಳ ವಾಡಿಕೆ ಮಟ್ಟವನ್ನು, ಪ್ರಸಕ್ತ ಗುಣಮಟ್ಟದ ಪೂರೈಕೆಯಲ್ಲಿನ ವಿವಿಧ ನಿಯತಾಂಕಗಳ ನಡುವಿನ ಅಪರ್ಯಾಪ್ತ ಸಂಯೋಜನೆಗಳನ್ನು ಹಾಗು ಅಪೇಕ್ಷಿತ ನಿಯತಾಂಕಗಳನ್ನು ಪ್ರತಿನಿಧಿಸಲು ಇರುವ ಸೌಲಭ್ಯಗಳ ಕೊರತೆಗಳನ್ನು ಮಾತ್ರ ಅವಲಂಬಿಸಿದೆ. ಆದರೆ, ಕಲಿಕಾ-ಫಲಿತಾಂಶಗಳ ಬಗ್ಗೆ ಮಾತ್ರ ಗಮನವನ್ನು ಕೇಂದ್ರೀಕರಿಸುವುದರಿಂದ ಇದಕ್ಕೆ ಪರಿಹಾರ ಕಂಡುಕೊಳ್ಳಲು ಆಗುತ್ತದೆ ಎಂದೇನೂ ಇಲ್ಲ. ಸದ್ಯಕ್ಕೆ "ಶಿಕ್ಷಣದ ಗುಣಮಟ್ಟ" ಕಾಯ್ದುಕೊಳ್ಳಲು ಬಹು-ಆಯಾಮದ ಚೌಕಟ್ಟೊಂದರ ಅಗತ್ಯವಿದೆ. ಅದು ಈ ಯಾವ-ಯಾವ ಸಂಗತಿಗಳ ವಿಶ್ಲೇಷಣೆಯ ಪ್ರಯೋಜನ ಪಡೆಯಬೇಕು ಎಂಬುದರ ಪಟ್ಟಿ ಇಂತಿದೆ: i) ಶಿಕ್ಷಣ ನೀಡುವ ವಿವಿಧ ಸಂಸ್ಥೆಗಳಿಂದ (ಸರ್ಕಾರಿ ಹಾಗು ಖಾಸಗಿ ಸಂಸ್ಥೆಗಳ ನಡುವಿನ ಗುಣಮಟ್ಟದ ವ್ಯತ್ಯಾಸಗಳ ವಿಷಯಕ್ಕೆ ಸಂಬಂಧಿಸಿದಂತೆ) ಹಿಡಿದು ಮೀಸಲಾತಿ ವರ್ಗಗಳು (ವಿವಿಧ ಆಕಾಂಕ್ಷೆಗಳ ವಿಷಯಕ್ಕೆ ಸಂಬಂಧಿಸಿದ ಹಾಗು ಸೌಲಭ್ಯವಂಚಿತ ವರ್ಗಗಳಿಗಾಗಿ ಬೋಧನಕಲೆಯ ವಿಷಯಗಳಿಗೆ ಸಂಬಂಧಿಸಿದಂತಹ ವಿಚಾರಗಳು) ಸೇರಿದಂತೆ ಗುಣಮಟ್ಟ ಕುರಿತ ಅನೇಕ, ಆದರೆ ಹೋಲಿಸಬಹುದಾದ ವ್ಯಾಖ್ಯಾನಗಳು ಮತ್ತು ii) ಶಿಕ್ಷಣದ ಗುಣಮಟ್ಟವನ್ನು ಸುಧಾರಿಸಲು ಅಗತ್ಯವಿರುವಷ್ಟು ವ್ಯವಸ್ಥೆಯ ವಿವಿಧ ಹಂತಗಳು ಹಾಗು ಸಂಸ್ಥೆಗಳು ಪರಸ್ಪರ ಸಂಬಂಧ ಹೊಂದಿರುವುದು (ಸುಧಾರಿತ ಕಲಿಕಾ-ಫಲಿತಾಂಶಗಳನ್ನು ಒಳಗೊಂಡಂತೆ) (ಮೆಹೆಂದಳೆ, ೨೦೧೪ರ ಲೇಖನ ನೋಡಿ).

ಕಲಿಕಾ-ಫಲಿತಾಂಶಗಳ ಮೇಲೆ ಇರಿಸಿರುವ ಅತಿರೇಕದ ಲಕ್ಷ್ಯವು ಪಠ್ಯಕ್ರಮ ಹಾಗು ಮೌಲ್ಯಮಾಪನಕ್ಕೆ ಸಂಬಂಧಿಸಿದ, "ಪಠ್ಯಕ್ರಮವು ವಿದ್ಯಾರ್ಥಿಗಳಿಗೆ ಕಲಿಕಾ-ಫಲಿತಾಂಶಗಳಲ್ಲಿ ಉನ್ನತ ಸಾಧನೆ ಮೆರೆಯುವ ಅಂತಾರಾಷ್ಟ್ರೀಯ ಪದ್ಧತಿಗಳಿಗೆ ಹೋಲಿಸಲಾಗುವಂತಹ ಉತ್ಕೃಷ್ಟ ಸಾಧನೆಗೈಯಲು ಅವಕಾಶಗಳನ್ನು ಕಲ್ಪಿಸಿಕೊಡಬೇಕು" (ಪು. ೨೧) ಎಂದು ಸೂಚಿಸುವ ಮೆಚ್ಚುಗೆಯ ಮಾತುಗಳಲ್ಲೂ ಎದ್ದುಕಾಣುತ್ತದೆ.

ಮೂಲಸೌಕರ್ಯಗಳ ಮಾನದಂಡದ ಗುಣಮಟ್ಟ ತಗ್ಗಿಸಲು ಅವಕಾಶವಿತ್ತು, ಕಲಿಕಾ-ಫಲಿತಾಂಶಗಳನ್ನು ಅಳವಡಿಸಿಕೊಳ್ಳುವಂತಹ ತಿದ್ದುಪಡಿಯನ್ನು ಶಿಕ್ಷಣ ಹಕ್ಕು ಕಾಯ್ದೆಗೆ ತರಲು ಹೊರಡುವುದು ಸಮಸ್ಯಾತ್ಮಕವಾಗಿದೆ. ಮೊದಲಿಗೆ, ಕಲಿಕಾ-ಫಲಿತಾಂಶವನ್ನು ಶೈಕ್ಷಣಿಕ ದಕ್ಷತೆ ಎಂಬಂತೆ ಕಲ್ಪಿಸಿಕೊಳ್ಳುವುದು, ಶಿಕ್ಷಣವು ಮಕ್ಕಳ ಸರ್ವತೋಮುಖ ಬೆಳವಣಿಗೆಗಾಗಿ ಇದೆಯೆಂದೂ, ಅದರ ಉದ್ದೇಶವು ಮಕ್ಕಳು ತಮ್ಮ ಸಂಪೂರ್ಣ ಸಾಮರ್ಥ್ಯವನ್ನು ಅರಿತುಕೊಳ್ಳಲು ಸಹಾಯವಾಗುವಂತೆ ಇರಬೇಕು ಎಂದೂ ಶಿಕ್ಷಣ ಕಾಯ್ದೆಯ ವಿಧಿ ೨೯ರ ಅಡಿಯಲ್ಲಿ ಕಲ್ಪಿಸಿರುವ ಪಠ್ಯಕ್ರಮದ ವ್ಯಾಪಕ ಗುರಿಗಳಿಗೆ ವಿರುದ್ಧವಾಗಿ ಸಾಗುತ್ತದೆ. ಎರಡನೆಯದಾಗಿ, ಕಲಿಕಾ-ಫಲಿತಾಂಶಗಳನ್ನು ಶಾಸನಬದ್ಧಗೊಳಿಸುವುದು ಅಪಾಯಕ್ಕೆ ಆಹ್ವಾನವಿತ್ತಂತೆ; ಏಕೆಂದರೆ, ಇವಕ್ಕೆ ವಿಧೇಯರಾಗಿರುವ ಪ್ರಯತ್ನದಲ್ಲಿ ಸೋಲು ಕಾಣುವುದು ಕಾನೂನಿನ ಪರಿಣಾಮಗಳಿಗೆ ಎಡೆಮಾಡುತ್ತದೆ. ನೀತಿ ಸಲಹೆಗಳಾದರೋ ಕಲಿಕಾ-ಫಲಿತಾಂಶಗಳನ್ನು ಸಾಧಿಸುವಲ್ಲಿನ ಸೋಲನ್ನು ಶಿಕ್ಷಕರ ಕಾರ್ಯನಿರ್ವಹಣೆಯೊಂದಿಗೆ ಕೊಂಡಿಹಾಕುವ ಹಾಗು ಅದರ ಹೊಣೆಯನ್ನು ಶಿಕ್ಷಕರ ಹೆಗಲಿಗೇರಿಸುವ ವಿಚಾರವನ್ನು ಮುಂದಿಡುತ್ತವೆ. ವಿದ್ಯಾರ್ಥಿಗಳು ಕಲಿಕಾ-ಫಲಿತಾಂಶಗಳನ್ನು ಪ್ರದರ್ಶಿಸಲು ಅಸಮರ್ಥರಾದರೆ ಅದರ ಹಿಂದೆ ಜಟಿಲ ಅಂಶಗಳು ಕೆಲಸಮಾಡಿದ್ದು, ಅದಕ್ಕಾಗಿ ಎಲ್ಲಾ ಜವಾಬ್ದಾರಿಯನ್ನು ಶಿಕ್ಷಕರ ಹೆಗಲಿಗೇರಿಸುವುದು ಸೂಕ್ತ ಕ್ರಮವಾಗಲಾರದು.

೩. ನಿಷ್ಪಕ್ಷಪಾತಕ್ಕೆ ಸಂಬಂಧಿಸಿದ ಆತಂಕಗಳನ್ನು (ಪು. ೧೦-೧೧) ಹಾಗು "ಶಿಕ್ಷಣ ಹಕ್ಕು ಕಾಯ್ದೆಯ ಅಧಿನಿಯಮ ೧೨ (೧) (c) ವನ್ನು ಸರ್ಕಾರದ ಧನಸಹಾಯ ಪಡೆದು ನಡೆಯುತ್ತಿರುವ ಅಲ್ಪಸಂಖ್ಯಾತರ (ಧಾರ್ಮಿಕ ಹಾಗು ಭಾಷಾವಾರು) ಸಂಸ್ಥೆಗಳಿಗೆ ವಿಸ್ತರಿಸುವ ವಿಚಾರವನ್ನು ಆರ್ಥಿಕವಾಗಿ ಹಿಂದುಳಿದ ವರ್ಗಗಳ ಏಳಿಗೆಗಾಗಿ ಇರುವ ಉದಾರ ರಾಷ್ಟ್ರೀಯ ಬದ್ಧತೆಗಳ ಭೂಮಿಕೆಯಲ್ಲಿ ಪರಿಶೀಲನೆಗೆ ಒಳಪಡಿಸಲಾಗುತ್ತದೆ (ಪು. ೨೦).

"ಶಿಕ್ಷಣ ಹಕ್ಕು ಕಾಯ್ದೆಯು ನಿಗದಿಪಡಿಸಿದ ನಿಯತಾಂಕಗಳ ವ್ಯಾಪ್ತಿಯಲ್ಲಿ ತಮ್ಮ ಸ್ಥಳೀಯ ಸ್ಥಿತಿಗತಿಗಳಿಗೆ ಅನುಗುಣವಾಗಿ ಮೂಲಸೌಕರ್ಯ ಹೇಗಿರಬೇಕು ಎಂಬುದನ್ನು ರೂಪಿಸಿಕೊಳ್ಳುವ ಹಾಗು ಅದಕ್ಕಾಗಿ ಯೋಜನೆ ಹಾಕಿಕೊಳ್ಳುವ ಸ್ವಾತಂತ್ರ್ಯವು ರಾಜ್ಯಗಳಿಗೆ ಇರುತ್ತದೆ.

"ಕಷ್ಟಕರ ಸನ್ನಿವೇಶಗಳಲ್ಲಿ ಬದುಕುತ್ತಿರುವ ಮಕ್ಕಳಿಗೆ, ವಲಸೆಗಾರರ ಮಕ್ಕಳಿಗೆ ಹಾಗು ಸೌಲಭ್ಯಗಳಿಂದ ಅತಿಯಾಗಿ ವಂಚಿತರಾದ ವಿಶಿಷ್ಟ ವರ್ಗದ ಮಕ್ಕಳಿಗೆ ಶೈಕ್ಷಣಿಕವಾಗಿ ಸಹಾಯಹಸ್ತ ಚಾಚುವ "ಪರ್ಯಾಯ ಶಾಲೆಗಳ" ವಿಚಾರವಾಗಿ ಸ್ಥಳೀಯ ಸ್ಥಿತಿಗತಿಗಳಿಗೆ ಅನುಗುಣವಾದ ಸ್ಥಳೀಯ ಮಾನದಂಡಗಳನ್ನು, ಅಗತ್ಯ ಕಂಡರೆ ಶಿಕ್ಷಣ ಹಕ್ಕು ಕಾಯ್ದೆಗೆ ತಿದ್ದುಪಡಿ ತರುವ ಮೂಲಕ, ವಿಕಾಸಗೊಳಿಸಲಾಗುವುದು. ಪೂರ್ಣಸಮಯದ ಸಾಂಪ್ರದಾಯಿಕ ಶಾಲೆಗಳಲ್ಲಿ ಶಿಕ್ಷಣವನ್ನು ಮುಂದುವರಿಸಲಾಗದೆ ಶಾಲೆ ತೊರೆದ ಮಕ್ಕಳಿಗೆ ಹಾಗು ಬಾಲಕಾರ್ಮಿಕರಿಗೆ ಮುಕ್ತ ಶಾಲಾ ಸೌಕರ್ಯಗಳನ್ನು ವಿಸ್ತರಿಸಲಾಗುವುದು." (ಪು. ೨೦).

**ಕಾಯ್ದೆಯ ನಿಬಂಧನೆಗಳು ಕಾಯ್ದೆಯ ನಿಬಂಧನೆಗಳು ಅಧಿಕೃತ ಆದೇಶದ ಸ್ವರೂಪ ಅಧಿಕೃತ ಆದೇಶದ ಸ್ವರೂಪ ಮುಖ್ಯಕಲ್ಪನೆ ಮುಖ್ಯಕಲ್ಪನೆ ಪೂರಕಕಲ್ಪನೆ ಪೂರಕಕಲ್ಪನೆ ಕಾಯ್ದೆಯ ನಿಬಂಧನೆಗಳು ಅಧಿಕೃತ ಆದೇಶದ ಸ್ವರೂಪ ಮುಖ್ಯಕಲ್ಪನೆ ಪೂರಕ ಕಲ್ಪನೆ**

೪ ಪ್ರಾಥಮಿಕ ಶಿಕ್ಷಣವನ್ನು ಪೂರ್ಣಗೊಳಿಸದ ಅಥವಾ ಶಾಲೆಗೆ ಸೇರಿರದ ಮಕ್ಕಳಿಗಾಗಿ ವಿಶೇಷ ಸವಲತ್ತುಗಳು ಪ್ರಾಥಮಿಕ ಶಿಕ್ಷಣವನ್ನು ಪೂರ್ಣಗೊಳಿಸದ ಅಥವಾ ಶಾಲೆಗೆ ಸೇರಿರದ ಮಕ್ಕಳಿಗಾಗಿ ವಿಶೇಷ ಸವಲತ್ತುಗಳು ವಿಶೇಷ ತರಬೇತಿಯ ಮೂಲಕ ವಯಸ್ಸಿಗೆ ಸೂಕ್ತ ದಾಖಲಾತಿ ಪ್ರಾಥಮಿಕ ಶಿಕ್ಷಣವನ್ನು ಪೂರ್ಣಗೊಳಿಸದ ಅಥವಾ ಶಾಲೆಗೆ ಸೇರಿರದ ಮಕ್ಕಳಿಗಾಗಿ ವಿಶೇಷ ಸವಲತ್ತುಗಳು ವಿಶೇಷ ತರಬೇತಿಯ ಮೂಲಕ ವಯಸ್ಸಿಗೆ ಸೂಕ್ತ ದಾಖಲಾತಿ ಶಾಲೆಯಿಂದ ಹೊರಗುಳಿದ ಮಕ್ಕಳ ವಿಚಾರವಾಗಿ ನಿಷ್ಪಕ್ಷಪಾತ (ಮುಖ್ಯವಾಗಿ ಹಿಂದುಳಿದ ಪಂಗಡಗಳಿಂದ ಬಂದವರಿಗಾಗಿ) ಶಾಲೆಯಿಂದ ಹೊರಗುಳಿದ ಮಕ್ಕಳ ವಿಚಾರವಾಗಿ ನಿಷ್ಪಕ್ಷಪಾತ (ಮುಖ್ಯವಾಗಿ ಹಿಂದುಳಿದ

ಪಂಗಡಗಳಿಂದ ಬಂದವರಿಗಾಗಿ) ಗುಣಮಟ್ಟ (ವಿಶೇಷ ತರಬೇತಿಯ ಮಾದರಿ ಹಾಗು ಸ್ವಭಾವಕ್ಕೆ ಅನುಗುಣವಾಗಿ) ಗುಣಮಟ್ಟ (ವಿಶೇಷ ತರಬೇತಿಯ ಮಾದರಿ ಹಾಗು ಸ್ವಭಾವಕ್ಕೆ ಅನುಗುಣವಾಗಿ) ೪ ಪ್ರಾಥಮಿಕ ಶಿಕ್ಷಣವನ್ನು ಪೂರ್ಣಗೊಳಿಸದ ಅಥವಾ ಶಾಲೆಗೆ ಸೇರಿರದ ಮಕ್ಕಳಿಗಾಗಿ ವಿಶೇಷ ಸವಲತ್ತುಗಳು ವಿಶೇಷ ತರಬೇತಿಯ ಮೂಲಕ ವಯಸ್ಸಿಗೆ ಸೂಕ್ತ ದಾಖಲಾತಿ ಶಾಲೆಯಿಂದ ಹೊರಗುಳಿದ ಮಕ್ಕಳ ವಿಚಾರವಾಗಿ ನಿಷ್ಪಕ್ಷಪಾತ (ಮುಖ್ಯವಾಗಿ ಹಿಂದುಳಿದ ಪಂಗಡಗಳಿಂದ ಬಂದವರಿಗಾಗಿ) ಗುಣಮಟ್ಟ (ವಿಶೇಷ ತರಬೇತಿಯ ಮಾದರಿ ಹಾಗು ಸ್ವಭಾವಕ್ಕೆ ಅನುಗುಣವಾಗಿ) 8 (c) 9 (c) 9 (k) ದುರ್ಬಲ ವರ್ಗದ ಹಾಗು ಸೌಲಭ್ಯವಂಚಿತ ವರ್ಗಗಳ ಮಕ್ಕಳ ವಿರುದ್ಧ ಇರುವ ತಾರತಮ್ಯ ಭಾವನೆಯನ್ನು ತಡೆಗಟ್ಟಲು ಕ್ರಮ ದುರ್ಬಲ ವರ್ಗದ ಹಾಗು ಸೌಲಭ್ಯವಂಚಿತ ವರ್ಗಗಳ ಮಕ್ಕಳ ವಿರುದ್ಧ ಇರುವ ತಾರತಮ್ಯ ಭಾವನೆಯನ್ನು ತಡೆಗಟ್ಟಲು ಕ್ರಮ ವಲಸೆಗಾರ ಕುಟುಂಬಗಳ ಮಕ್ಕಳ ದಾಖಲಾತಿ ಖಾತ್ರಿಪಡಿಸುವುದು ದುರ್ಬಲ ವರ್ಗದ ಹಾಗು ಸೌಲಭ್ಯವಂಚಿತ ವರ್ಗಗಳ ಮಕ್ಕಳ ವಿರುದ್ಧ ಇರುವ ತಾರತಮ್ಯ ಭಾವನೆಯನ್ನು ತಡೆಗಟ್ಟಲು ಕ್ರಮ ವಲಸೆಗಾರ ಕುಟುಂಬಗಳ ಮಕ್ಕಳ ದಾಖಲಾತಿ ಖಾತ್ರಿಪಡಿಸುವುದು ನಿಷ್ಪಕ್ಷಪಾತ ನಿಷ್ಪಕ್ಷಪಾತ ಹೊಣೆಗಾರಿಕೆ ಹೊಣೆಗಾರಿಕೆ 8 (c) 9 (c) 9 (k) ದುರ್ಬಲ ವರ್ಗದ ಹಾಗು ಸೌಲಭ್ಯವಂಚಿತ ವರ್ಗಗಳ ಮಕ್ಕಳ ವಿರುದ್ಧ ಇರುವ ತಾರತಮ್ಯ ಭಾವನೆಯನ್ನು ತಡೆಗಟ್ಟಲು ಕ್ರಮ ವಲಸೆಗಾರ ಕುಟುಂಬಗಳ ಮಕ್ಕಳ ದಾಖಲಾತಿ ಖಾತ್ರಿಪಡಿಸುವುದು ನಿಷ್ಪಕ್ಷಪಾತ ಹೊಣೆಗಾರಿಕೆ 12 (1) (c) ದುರ್ಬಲ ವರ್ಗಗಳು ಹಾಗು ಸೌಲಭ್ಯವಂಚಿತ ಪಂಗಡಗಳಿಂದ ಬರುವ ಮಕ್ಕಳಿಗೆ ಖಾಸಗೀ ಶಾಲೆಗಳಲ್ಲಿ ೨೫ % ದುರ್ಬಲ ವರ್ಗಗಳು ಹಾಗು ಸೌಲಭ್ಯವಂಚಿತ ಪಂಗಡಗಳಿಂದ ಬರುವ ಮಕ್ಕಳಿಗೆ ಖಾಸಗಿ ಶಾಲೆಗಳಲ್ಲಿ ೨೫ % ಮೀಸಲಾತಿ ದುರ್ಬಲ ವರ್ಗಗಳು ಹಾಗು ಸೌಲಭ್ಯವಂಚಿತ ಪಂಗಡಗಳಿಂದ ಬರುವ ಮಕ್ಕಳಿಗೆ ಖಾಸಗೀ ಶಾಲೆಗಳಲ್ಲಿ ೨೫ % ಮೀಸಲಾತಿ ನಿಷ್ಪಕ್ಷಪಾತ ನಿಷ್ಪಕ್ಷಪಾತ ನಿಯಂತ್ರಣನಿಯಂತ್ರಣ ನಿಯಂತ್ರಣ ೧೨ (೧) (c) ದುರ್ಬಲ ವರ್ಗಗಳು ಹಾಗು ಸೌಲಭ್ಯವಂಚಿತ ಪಂಗಡಗಳಿಂದ ಬರುವ ಮಕ್ಕಳಿಗೆ ಖಾಸಗೀ ಶಾಲೆಗಳಲ್ಲಿ ೨೫ % ಮೀಸಲಾತಿ ನಿಷ್ಪಕ್ಷಪಾತ ನಿಯಂತ್ರಣ

೧೨ (೨) ೨೫ % ಮೀಸಲಾತಿಯ ಅಡಿಯಲ್ಲಿ ದಾಖಲಾತಿಯ ಖರ್ಚನ್ನು ಸರ್ಕಾರದ ವತಿಯಿಂದ ಮರುಪಾವತಿ ಮಾಡಲಾಗುವುದು ೨೫ % ಮೀಸಲಾತಿಯ ಅಡಿಯಲ್ಲಿ ದಾಖಲಾತಿಯ ಖರ್ಚನ್ನು ಸರ್ಕಾರದ ವತಿಯಿಂದ ಮರುಪಾವತಿ ಮಾಡಲಾಗುವುದು ೨೫ % ಮೀಸಲಾತಿಯ ಅಡಿಯಲ್ಲಿ ದಾಖಲಾತಿಯ ಖರ್ಚನ್ನು ಸರ್ಕಾರದ ವತಿಯಿಂದ ಮರುಪಾವತಿ ಮಾಡಲಾಗುವುದು ನಿಷ್ಪಕ್ಷಪಾತ ನಿಷ್ಪಕ್ಷಪಾತ ನಿಯಂತ್ರಣ ನಿಯಂತ್ರಣ ೧೨ (೨) ೨೫ % ಮೀಸಲಾತಿಯ ಅಡಿಯಲ್ಲಿ ದಾಖಲಾತಿಯ ಖರ್ಚನ್ನು ಸರ್ಕಾರದ ವತಿಯಿಂದ ಮರುಪಾವತಿ ಮಾಡಲಾಗುವುದು ನಿಷ್ಪಕ್ಷಪಾತ ನಿಯಂತ್ರಣ

ಚರ್ಚೆ: ಶಿಕ್ಷಣ ಹಕ್ಕು ಕಾಯ್ದೆಯಲ್ಲಿ ನಿಷ್ಪಕ್ಷಪಾತದ ಆತಂಕಗಳನ್ನು **(equity concerns)** ಪರಿಗಣಿಸುವ ಅನೇಕ ನಿಬಂಧನೆಗಳಿವೆ. ಮೇಲೆ ನೀಡಲಾಗಿರುವ ಕೋಷ್ಟಕವು ಇದರ ಸಾರಸಂಗ್ರಹವನ್ನು ತಿಳಿಸುತ್ತದೆ.

ಶಿಕ್ಷಣ ಹಕ್ಕು ಕಾಯ್ದೆಯ ೧೨ (೧) (c) ಅಧಿನಿಯಮವನ್ನು ಸರ್ಕಾರದ ಧನಸಹಾಯದಿಂದ ನಡೆಯುತ್ತಿರುವ ಅಲ್ಪಸಂಖ್ಯಾತ (ಧಾರ್ಮಿಕ ಹಾಗು ಭಾಷಾವಾರು) ಸಂಸ್ಥೆಗಳಿಗೆ ವಿಸ್ತರಿಸುವ ವಿಚಾರವನ್ನು ಸ್ವಾಗತಿಸುತ್ತೇವೆಯಾದರೂ, ನಿಷ್ಪಕ್ಷಪಾತದ ವಿಚಾರವಾಗಿ ರಾಷ್ಟ್ರೀಯ ಶಿಕ್ಷಣನೀತಿಯು ಈ ಕೆಳಗಿನ ಸೂಕ್ತಕ್ರಮಗಳನ್ನು ಕೈಗೊಳ್ಳುವ ಮೂಲಕ ಶಿಕ್ಷಣ ಹಕ್ಕು ಕಾಯ್ದೆಯಲ್ಲಿ ಈಗಾಗಲೇ ಇರುವ ನಿಬಂಧನೆಗಳಿಗೆ ಬಲತುಂಬುತ್ತದೆ ಎಂದು ಬಯಸುತ್ತೇವೆ:

a. ಹಿಂದುಳಿದ ಪಂಗಡಗಳನ್ನು (ಅದರಲ್ಲೂ ವಿಶೇಷವಾಗಿ, ಸೌಲಭ್ಯವಂಚಿತ ಪಂಗಡಗಳನ್ನು) ಮುಖ್ಯವಾಹಿನಿಯ ಶಾಲಾಶಿಕ್ಷಣದೊಂದಿಗೆ ಬೆಸೆಯುವುದು.

b. ಎಲ್ಲಾ ರೀತಿಯ ಶಾಲಾ ಆವರಣಗಳಲ್ಲೂ ಕಂಡುಬರಬಹುದಾದ ತಾರತಮ್ಯವನ್ನು ಸರಿಪಡಿಸುವ ಬಗ್ಗೆ ಚಿಂತನೆ.

c. 12 (1) c ಗಾಗಿ ಸಮಯೋಚಿತವೂ, ಪರ್ಯಾಪ್ತವೂ ಆದ ಧನಸಹಾಯದ ಮೂಲಕ ತನ್ನ ಬದ್ಧತೆಯನ್ನು ಬಲಪಡಿಸುವುದು (೨೫ % ಶಿಕ್ಷಣ ಹಕ್ಕು ಕಾಯ್ದೆ ಮೀಸಲಾತಿಯಡಿ ದಾಖಲಾತಿ ಮಾಡಿಸಿಕೊಂಡ ಮಕ್ಕಳ ಶುಲ್ಕವನ್ನು ಖಾಸಗಿ ಶಾಲೆಗಳಿಗೆ ಮರುಪಾವತಿ ಮಾಡುವ ಮೂಲಕ).

d. ವಿಶಿಷ್ಟ ನಿಬಂಧನೆಗಳಿಗೆ ಸರ್ಕಾರಿ ಹಾಗು ಖಾಸಗಿ ಶಾಲೆಗಳೆರಡೂ ಒಳಪಡುವಂತೆ ನೋಡಿಕೊಳ್ಳುವ ನಿಯಂತ್ರಣ ಹಾಗು ಜವಾಬ್ದಾರಿ.

ಶಾಲಾ ಮೂಲಸೌಕರ್ಯದ ಬಗ್ಗೆ ಶಿಕ್ಷಣ ಹಕ್ಕು ಕಾಯ್ದೆಯ ನಿಬಂಧನೆಗಳು ಗೊತ್ತುಪಡಿಸಿರುವ ಭೌತಿಕ ಸೌಲಭ್ಯ, ಗುಣಮಟ್ಟ ಹಾಗು

ಮಾನದಂಡಗಳಿಗೆ ಅನುಸಾರವಾಗಿ ಸೌಲಭ್ಯವಂಚಿತ ಹಾಗು ವಲಸೆ ಕೆಲಸಗಾರರ ಮಕ್ಕಳಿಗಾಗಿ "ಪರ್ಯಾಯ ಶಾಲೆಗಳ" ಅಗತ್ಯವನ್ನು ಪುನಃ ಪರಿಶೀಲಿಸಬೇಕಿದೆ.

"ಪರ್ಯಾಯ ಶಾಲೆ" ಎಂಬುದು ಸೌಲಭ್ಯವಂಚಿತ ಹಾಗು ವಲಸೆಗಾರರ ಮಕ್ಕಳಿಗಾಗಿ (ಕಳಪೆ ಗುಣಮಟ್ಟದ) ವಿಭಿನ್ನತರ ಶಿಕ್ಷಣವನ್ನು ನೀಡಲು ಒಂದು ನೆಪಮಾತ್ರ ಆಗಬಾರದು. ಇದೇ ತರ್ಕವು "ಶಾಲೆ ತೊರೆದ ಮಕ್ಕಳಿಗೆ ಮತ್ತು ಬಾಲಕಾರ್ಮಿಕರಿಗಾಗಿ ಮುಕ್ತ ಶಾಲಾ ಸೌಲಭ್ಯ"ಗಳ ವಿಷಯಕ್ಕೂ ಅನ್ವಯವಾಗುತ್ತದೆ.

೪. ಆಡಳಿತ ಮತ್ತು ನಿರ್ವಹಣೆ (ಪು. ೧೨) –"ಶಿಕ್ಷಣವ್ಯವಸ್ಥೆ ಹಾಗು ಸಂಸ್ಥೆಗಳ ಆಡಳಿತ ಮತ್ತು ನಿರ್ವಹಣೆಯು, ಅದರಲ್ಲೂ ವಿಶೇಷವಾಗಿ ಉನ್ನತ ಶಿಕ್ಷಣದ ಹಂತದಲ್ಲಿ, ಶಿಕ್ಷಣ ನೀಡಲು ಮುಂದಾಗಿರುವ ಅನೇಕ ಸಂಸ್ಥೆಗಳ, ಕಾರ್ಯಕ್ರಮಗಳ ಹಾಗು ಬಂಡವಾಳ ಹೂಡಿಕೆಯ ರೀತಿಗಳ ವಿಷಯದಿಂದಾಗಿ ಜಟಿಲಗೊಂಡಿದೆ.

"ಶಾಲಾ ಹಂತದಲ್ಲಿ ಎಂತೋ ಅಂತೆಯೇ ಉನ್ನತ ಶಿಕ್ಷಣ ಕ್ಷೇತ್ರದಲ್ಲಿ ವ್ಯಾಪಾರೀಕರಣವು ಹದ್ದುಮೀರಿದ್ದು, ಖಾಸಗಿ ಶೈಕ್ಷಣಿಕ ಸಂಸ್ಥೆಗಳಲ್ಲಿ ಆಗ್ರಹಿಸಲಾಗುವ ದಾಖಲಾತಿ ಶುಲ್ಕವು ಇದನ್ನು ಪ್ರತಿಬಿಂಬಿಸುತ್ತದೆ. ನಿರೀಕ್ಷಿತ ಗುಣಮಟ್ಟ ಕಾಯ್ದುಕೊಳ್ಳದ ಶಿಕ್ಷಣಸಂಸ್ಥೆಗಳು ನಾಯಿಕೊಡೆಗಳಂತೆ ತಲೆಯೆತ್ತುತ್ತಿರುವುದು ಶಿಕ್ಷಣವ್ಯವಸ್ಥೆಯಲ್ಲಿ ಭರವಸೆ ಕುಗ್ಗಲು ಕಾರಣವಾಗಿದೆ"

ಚರ್ಚೆ: ಮೊದಲನೇ ಅಭಿಪ್ರಾಯವು ಶಾಲಾಶಿಕ್ಷಣದ ವಿಷಯದಲ್ಲೂ ಸತ್ಯವಾದುದು. ಸದ್ಯಕ್ಕೆ ಸರ್ಕಾರಿ ಧನಸಹಾಯ ಪಡೆಯದ ಖಾಸಗಿ ಶಾಲೆಗಳ "ಕಾರ್ಯಾಚರಣೆಯ ಹರಹು ವಿಸ್ತಾರವಾಗಿದ್ದು, ಅವುಗಳು ಆಗ್ರಹಿಸುವ ಶುಲ್ಕಗಳ ವ್ಯಾಪ್ತಿಯೂ ಮಾರ್ಪಾಡಾಗುತ್ತಾ ಹೋಗುತ್ತದೆ–ಅಲ್ಪ ಶುಲ್ಕದಿಂದ ಹಿಡಿದು ದುಬಾರಿ ಶುಲ್ಕ ಹಾಗು ಅತಿದುಬಾರಿ ಶುಲ್ಕಗಳನ್ನು ಆಗ್ರಹಿಸುವ ಅವುಗಳನ್ನು ಸ್ವಯಂಸೇವಾ ಸಂಘಟನೆಗಳು, ಮತಪ್ರಚಾರಕ ಸಂಸ್ಥೆಗಳು, ಸಮಾಜಸೇವಾ ಸಂಸ್ಥೆಗಳು ಅಥವಾ ವಾಣಿಜ್ಯೋದ್ಯಮಿಗಳು ವೈಯಕ್ತಿಕ ಉದ್ಯಮದಂತೆ ನಡೆಸುತ್ತಿದ್ದಾರೆ". (ಶ್ರೀವಾಸ್ತವ, ನೊರೊನ್ಹಾ ಮತ್ತು ಫೆನೆಲ್, ೨೦೧೩:೪)

ಇದಕ್ಕೆ ಸೇರಿದಂತೆ, ಪರ್ಯಾಯ ಶಾಲೆಗಳು, ಪ್ರಗತಿಶೀಲ ಶಾಲೆಗಳು ಹಾಗು ಧಾರ್ಮಿಕ ಮಂಡಳಿಗಳು ನಡೆಸುವ ಶಾಲೆಗಳು, ಹೊಸಯುಗದ "ಶಿಕ್ಷಣೋದ್ಯಮಿ"ಗಳು ಹಾಗು ವಿವಿಧ ರೂಪದ ಕಾರ್ಪೊರೇಟ್ ಸಂಸ್ಥೆಗಳು ನಡೆಸುತ್ತಿರುವ ಸರಣಿ ಶಾಲೆಗಳು ಅಥವಾ ಪರವಾನಗಿ ಶಾಲೆಗಳಿವೆ. ಶಿಕ್ಷಣ ಸೇವೆಗಳನ್ನು ನೀಡುವ ಸಂಸ್ಥೆಗಳ ಹರಹು ಗಮನಾರ್ಹ ವಿಸ್ತರಣೆಗಳನ್ನು ಕಂಡಿವೆ. ಅಧ್ಯಯನವೊಂದು ಗಮನಿಸುವಂತೆ, ಈ ರೀತಿಯ ಸೇವೆ ನೀಡುವ ಸಂಸ್ಥೆಗಳು "ಇತ್ತೀಚಿನ ವರ್ಷಗಳಲ್ಲಿ ಭಾರತೀಯ ಶಿಕ್ಷಣ ವಾತಾವರಣದ ಮುಖ್ಯ ಅಂಗವಾಗಿ ಹೊರಹೊಮ್ಮುತ್ತಿರುವುದು ಹೆಚ್ಚಾಗುತ್ತಿದೆ. ಅವು ನೀಡುವ ಸೇವೆಗಳ ವ್ಯಾಪ್ತಿಯು ಶಿಕ್ಷಕ ಹಾಗು ಆಡಳಿತ ವರ್ಗದ ತರಬೇತಿ/ಕಾರ್ಯಾಗಾರಗಳಿಂದ ಹಿಡಿದು ಪಠ್ಯಕ್ರಮ ನಿರ್ವಹಣೆ ಮಾತ್ರವಲ್ಲದೆ, ಬೋಧನಾ ಚಟುವಟಿಕೆಗಳು ಹಾಗು ಬೋಧನ ಶಾಸ್ತ್ರಗಳಿಗೆ ಸಂಬಂಧಿಸಿವೆ". (ಗರ್ಗ್, ೨೦೧೧: ೩೫). ಕೊನೆಯದಾಗಿ, ವಿವಿಧ ಪಠ್ಯಕ್ರಮ ಹಾಗು ಶಾಲಾ ಸಂಬಂಧಿತ ಉತ್ಪನ್ನಗಳನ್ನು ಮತ್ತು ಸೇವೆಗಳನ್ನು ತಲುಪಿಸುವ, ಈ ಕಾರ್ಯಕ್ರಮಗಳಿಗೆ ಬಂಡವಾಳ ಒದಗಿಸುವ ಕಾರ್ಯವು ಸಂಕೀರ್ಣ ಸಾಂಸ್ಥಿಕ ವ್ಯವಸ್ಥೆಗಳ ಮೂಲಕ ನಡೆಯುತ್ತಿದ್ದು, ಅದು ಶಿಕ್ಷಣ–ಮಾರುಕಟ್ಟೆಯನ್ನು ಗಮನದಲ್ಲಿರಿಸಿ ಕಾರ್ಯನಿರ್ವಹಿಸುವ ಸಾಹಸೋದ್ಯಮ ಕಂಪೆನಿಗಳನ್ನು, ಅನೇಕ ವಿಧದ ಸಾರ್ವಜನಿಕ–ಖಾಸಗಿ ಸಹಭಾಗಿತ್ವಗಳನ್ನು ಹಾಗು ಶಾಲೆಯ ಸಾಂಪ್ರದಾಯಿಕ ಸಾಂಸ್ಥಿಕ ಚೌಕಟ್ಟನ್ನು ಮೀರದೆ ಅಸ್ತಿತ್ವದಲ್ಲಿರುವ ಅನೌಪಚಾರಿಕ/ಆಶ್ರಿತ ಸಂಸ್ಥೆಗಳ ಮೂಲಕ ಸಮಾಜವನ್ನು ಪ್ರಭಾವಿಸುವ ಹೂಡಿಕೆಗಳನ್ನು ಒಳಗೊಂಡಿದೆ.

ಆದ್ದರಿಂದ, ಮೇಲೆ ಚರ್ಚಿಸಲಾದ ವಿಚಾರವಾಗಿ ಪರ್ಯಾಪ್ತವೂ, ಪರಿಣಾಮಕಾರಿಯೂ ಆದ ನಿಯಂತ್ರಣಾತ್ಮಕ ವಾತಾವರಣದ ವಿಚಾರಕ್ಕೆ ಒತ್ತುಕೊಡುವ ಅಗತ್ಯವಿದೆ. ಇದೊಂದು ವಿಪರೀತ ನಿರ್ಲಕ್ಷ್ಯಕ್ಕೆ ಒಳಗಾದ ಕ್ಷೇತ್ರ. ಆಡಳಿತ ಹಾಗು ನಿರ್ವಹಣೆಗಳಿಗೆ ಮೀಸಲಾದ ಭಾಗವು ಕೂಡ ಈ ಎಲ್ಲ ಯೋಜನೆಗಳು (ಸರ್ವಶಿಕ್ಷಾ ಅಭಿಯಾನವೂ ಒಳಗೊಂಡಂತೆ) ಹಾಗು ಕಾರ್ಯಕ್ರಮಗಳು ಶಿಕ್ಷಣ ಹಕ್ಕು ಕಾಯ್ದೆಯೊಂದಿಗೆ ಸಾಮರಸ್ಯ ಸಾಧಿಸಿದೆಯೇ ಎಂಬುದಕ್ಕೆ ಒತ್ತುನೀಡುವುದಿಲ್ಲ. ಸರ್ವಶಿಕ್ಷಾ ಅಭಿಯಾನವನ್ನು ಕಾರ್ಯರೂಪಕ್ಕೆ ತರುವ ಪರಿಷ್ಕೃತ ಚೌಕಟ್ಟಿನಲ್ಲಿ ಇಂತಹ ಕಟ್ಟುಪಾಡನ್ನು ನಿಗದಿಪಡಿಸಲಾಗಿದೆ (ಸರ್ವಶಿಕ್ಷಾ ಅಭಿಯಾನ, ೨೦೧೧; ವಿಶೇಷವಾಗಿ ಆಡಳಿತ ಹಾಗು ಮೇಲ್ವಿಚಾರಣೆಯ ಅಧ್ಯಾಯ ೭ನ್ನು ನೋಡಿ).

೫. “ನಾಲ್ಕರಿಂದ ಐದರ ವಯಸ್ಸಿನ ಪೂರ್ವ ಪ್ರಾಥಮಿಕ ಶಾಲಾ ಮಕ್ಕಳು ಪ್ರಾಥಮಿಕ ಹಂತಕ್ಕೆ ಸಲೀಸಾಗಿ ದಾಟಿಹೋಗಲು ಬೇಕಿರುವ ಕಲಿಕೆ ಹಾಗು ವಿಕಸನಾತ್ಮಕ ಸಿದ್ಧತೆ ಪೂರ್ಣವಾಗಲು ಬಾಲ್ಯಶಿಕ್ಷಣದ ಸೇವೆಗಳನ್ನು ವಿಸ್ತರಿಸಬೇಕಿದ್ದು, ಈ ವಿಚಾರದಲ್ಲಿ ವಿಶೇಷವಾಗಿ ಸೌಲಭ್ಯವಂಚಿತ ವರ್ಗದ ಮಕ್ಕಳ ಬಗ್ಗೆ ಗಮನಹರಿಸಬೇಕಿದೆ” (ಪು. ೧೫).
ಚರ್ಚೆ: ಚಿಕ್ಕ ಮಕ್ಕಳ ಶಿಕ್ಷಣದ ಬಗ್ಗೆ ನೀತಿ ಸಲಹೆಗಳು ಬಹಳಷ್ಟು ಒತ್ತು ನೀಡುತ್ತಿರುವುದು ಒಳ್ಳೆಯ ಸೂಚನೆಯೇ. ಇದನ್ನು ನಿಯಮಾವಳಿ ೨೦ Aನಲ್ಲಿ ಸೇರಿಸಿರಲಿಲ್ಲ. ನೀತಿಯು ಬಾಲ್ಯ ಶಿಕ್ಷಣದ ಬಗ್ಗೆ ಹೆಚ್ಚಿನ ಒತ್ತು ನೀಡುತ್ತಿದ್ದಾಗ್ಯೂ, ಈ ಪ್ರಸ್ತಾವದ ವಿಚಾರವಾಗಿ ಕೆಲ ಸಮಸ್ಯೆಗಳಿವೆ. ಮೊದಲನೆಯದಾಗಿ, ನಾಲ್ಕರಿಂದ ಐದು ವಯಸ್ಸಿನ ಮಕ್ಕಳ ಯಾವ ಶಿಕ್ಷಣವನ್ನು ಕುರಿತು ಇದು ಹೇಳುತ್ತದೋ ಅದಕ್ಕೂ, ಮಕ್ಕಳು ಒಂದನೇ ತರಗತಿಗೆ ಸೇರುವ ವಯಸ್ಸಿಗೂ (ಆರು ವರ್ಷ) ಹೊಂದಾಣಿಕೆಯಾಗುವುದಿಲ್ಲ. ಇದು ಬಾಲ್ಯ ಪೋಷಣೆ ಹಾಗು ಶಿಕ್ಷಣಗಳಿಂದ ಪೋಷಣೆಯ ಆಯಾಮವನ್ನು ಕೈಬಿಟ್ಟಿದೆ. ನಿಷ್ಠಾವಂತ ಶಿಕ್ಷಕರಿಗೆ ಹಣ ಒದಗಿಸಲು ಸಂಪನ್ಮೂಲಗಳನ್ನು ನಿಗದಿಪಡಿಸುವುದನ್ನು ಬಿಟ್ಟು ಬಾಲ್ಯ ಶಿಕ್ಷಣದ ಜವಾಬ್ದಾರಿಯನ್ನು ಅಂಗನವಾಡಿ ಕಾರ್ಯಕರ್ತೆಯರ ಮೇಲೆ ಹೇರಿದೆಯಷ್ಟೇ. ಒಂದೆಡೆ, ಬಾಲ್ಯ ಶಿಕ್ಷಣದ ನಿಬಂಧನೆಯು ಶಿಕ್ಷಣದ ಲಭ್ಯತೆ, ಎಲ್ಲಾ ವರ್ಗಗಳ ಸೇರ್ಪಡೆ ಹಾಗು ವಿವಿಧ ಅಗತ್ಯಗಳಿಗೆ ಸ್ಪಂದಿಸುವ ಬದ್ಧತೆ ತೋರುತ್ತದೆಯಾದರೂ, ಮತ್ತೊಂದೆಡೆ, ಬಾಲ್ಯ ಶಿಕ್ಷಣಕ್ಕೆ ಹಣಸಹಾಯವನ್ನು ಆಯ್ಕೆಯ ಆಧಾರದ ಮೇಲೆ ನೀಡಲು ಬದ್ಧತೆ ತೋರುವ ಮೂಲಕ ಮೊದಲ ಬದ್ಧತೆಯನ್ನು ಅಲ್ಲಗಳೆಯುತ್ತದೆ.

೬. “೨೦೦೬ರ ರಾಷ್ಟ್ರೀಯ ಶಿಕ್ಷಣನೀತಿಯು (National Education Policy -NEP) ವಿಶ್ವಾಸನೀಯವೂ, ಉಚ್ಚ ಕಾರ್ಯನಿರ್ವಹಣಾ ಕ್ಷಮತೆಯುಳ್ಳದ್ದಾಗಿದ್ದು, ಸಮಾಜದ ಎಲ್ಲ ವರ್ಗಗಳಿಗೂ ಗುಣಮಟ್ಟದ ಶಿಕ್ಷಣವನ್ನು ತಲುಪಿಸುವ ಸಾಮರ್ಥ್ಯವಿರುವ ಶಿಕ್ಷಣವ್ಯವಸ್ಥೆಯ ಕನಸು ಕಾಣುತ್ತದೆ. ಈ ವ್ಯವಸ್ಥೆಯು ಪ್ರಜೆಗಳು ಫಲಪ್ರದ ಜೀವನವನ್ನು ನಡೆಸಲು, ದೇಶದ ಬೆಳವಣಿಗೆಯಲ್ಲಿ ಭಾಗವಹಿಸಲು, ಅತಿವೇಗವಾಗಿ ಬದಲಾಗುತ್ತಿರುವ, ದಿನೇದಿನೇ ಜಾಗತೀಕರಣಗೊಳ್ಳುತ್ತಿರುವ, ಜ್ಞಾನಾಧಾರಿತ ಆರ್ಥಿಕತೆ ಹಾಗು ಸಮಾಜದ ಅಗತ್ಯಗಳಿಗೆ ಸ್ಪಂದಿಸಬಲ್ಲ ಜ್ಞಾನ, ಕೌಶಲ, ಮನೋಭಾವ ಹಾಗು ಜೀವನಮೌಲ್ಯಗಳಿಂದ ಸಜ್ಜಾದ ವಿದ್ಯಾರ್ಥಿಗಳು/ಪದವೀಧರರನ್ನು ತಯಾರುಮಾಡುವ ಹೊಣೆಹೊತ್ತಿದೆ” (ಪು. ೧೪).
ಚರ್ಚೆ: ಕನಸೇನೋ ಎಲ್ಲವನ್ನೂ ಒಳಗೊಳ್ಳುವಂತೆ, ಎಲ್ಲಾ ರೀತಿಯ ಸೂಕ್ತ ಪದಗಳಿಂದಲೂ ಧ್ವನಿತವಾಗಿದೆ. “೨೦೩೦ರ ಕಾರ್ಯಸೂಚಿ ಹಾಗು ಸುಸ್ಥಿರ ಅಭಿವೃದ್ಧಿ ಗುರಿಗಳ” (Agenda 2030 and Sustainable Development Goals) ಒಪ್ಪಂದದ ಅಡಿಯಲ್ಲಿ ನಮ್ಮ ಅಂತಾರಾಷ್ಟ್ರೀಯ ಬದ್ಧತೆಗಳನ್ನು ಇದು ಪ್ರತಿಧ್ವನಿಸುತ್ತದೆ, ಆದರೂ, ಇವುಗಳಲ್ಲಿ ಸಹಜ ಅಂತರ್ಗತ ತುಡಿತ, ತವಕಗಳಿದ್ದು ಅವುಗಳನ್ನು ಬಗೆಹರಿಸಿಕೊಳ್ಳುವ ವಿಚಾರವಾಗಿ ಯಾವುದೇ ಸ್ಪಷ್ಟತೆ ಇಲ್ಲ. ಉದಾಹರಣೆಗೆ, ಜಾಗತಿಕ ಆರ್ಥಿಕತೆಯೊಂದಿಗೆ ಬೆಸೆದುಕೊಳ್ಳುವ ಕಾಣ್ಕೆಯನ್ನು ಸಾಮಾಜಿಕ ನ್ಯಾಯ ಹಾಗು ನಿಷ್ಪಕ್ಷಪಾತದ ವಿಚಾರಗಳೊಂದಿಗೆ ತಿಕ್ಕಾಟಕ್ಕೆ ಇಳಿಯುವ ಯೋಗ್ಯತೆಯ ವಿಚಾರಕ್ಕೆ ವಿಸ್ತರಿಸಿದರೆ ಎಲ್ಲಾ ಸಾಮಾಜಿಕ ವರ್ಗಗಳನ್ನೂ ಒಳಗೊಳ್ಳುವಂತಹ ಗುಣಮಟ್ಟದ “ಸೇರ್ಪಡೆ ಶಿಕ್ಷಣ”ದ ವಿಚಾರಕ್ಕೆ ಪೆಟ್ಟು ಬೀಳಬಹುದು. ಈ ಕನಸು ನನಸಾಗಬೇಕಾದರೆ ಅದನ್ನು ಕೆಳಗೆ ಹೇಳಿರುವ ನೀತಿ ನಿಬಂಧನೆಗಳ ಮೂಲಕ ನಿರ್ದಿಷ್ಟವಾಗಿ ಕಾರ್ಯರೂಪಕ್ಕೆ ತರುವ ಅಗತ್ಯವಿದೆ.

೭. “ಕಡಿಮೆ ದಾಖಲಾತಿ ಹಾಗು ಅಸಮರ್ಪಕ ಮೂಲಸೌಕರ್ಯಗಳಿರುವ ಶಾಲೆಗಳನ್ನು ಗುರುತಿಸಲು ಪ್ರತಿ ರಾಜ್ಯವೂ ಸವಿವರ ಶಾಲಾ ನಕ್ಷೆ ತಯಾರಿಸುವ ಯೋಜನೆ ಹಾಕಿಕೊಳ್ಳಬೇಕಿದೆ. ಎಲ್ಲಿ ಸಾಧ್ಯವೋ ಅಲ್ಲೆಲ್ಲಾ ಅಸ್ತಿತ್ವದಲ್ಲಿದ್ದೂ ಕಾರ್ಯಸಾಧುವಾಗಿರದ ಶಾಲೆಗಳನ್ನು ಶೈಕ್ಷಣಿಕ, ವಾಣಿಜ್ಯ ಹಾಗು ಕೈಗಾರಿಕೋದ್ಯಮ ತರಬೇತಿ ನೀಡುವ ಸಂಯುಕ್ತಶಾಲೆಗಳನ್ನಾಗಿ ಪರಿವರ್ತಿಸುವ ಪ್ರಯತ್ನವಾಗಬೇಕಿದೆ. ಹಾಗಾದಲ್ಲಿ, ಎಷ್ಟು ಅಗತ್ಯವೋ ಅಷ್ಟು ಮಾನವ, ಭೌತಿಕ ಹಾಗು ಮೂಲಸೌಕರ್ಯರೂಪದ ಸಂಪನ್ಮೂಲಗಳ ಬಳಕೆಯಾಗಿ ಉತ್ತಮತರ ಶೈಕ್ಷಣಿಕ ಸಾಧನೆ ಹಾಗು ಕಡಿಮೆ ವೆಚ್ಚದ ಪರಿಣಾಮಕಾರಿ ನಿರ್ವಹಣೆ ಸಾಧ್ಯವಾಗುತ್ತದೆ. ಶಾಲೆಗಳ ವಿಲೀನವಾದಾಗ ಅವುಗಳನ್ನು ಒಂದೇ ಆವರಣದಲ್ಲಿ ನೆಲೆಗೊಳಿಸಬಹುದು. ರಾಜ್ಯಗಳೊಂದಿಗಿನ ಅಭಿಪ್ರಾಯ ವಿನಿಮಯದ ಮೂಲಕ ಶಿಕ್ಷಣ ಹಕ್ಕು ಕಾಯ್ದೆಯ ನಿಬಂಧನೆಗಳನ್ನು ಸಡಿಲಿಸದೆಯೇ ವಿಲೀನದ ಹಾಗು ಕ್ರೋಡೀಕರಣದ ಸಾಮಾನ್ಯ ಗೊತ್ತುವಳಿಗಳನ್ನು

ಅಭಿವೃದ್ಧಿಗೊಳಿಸಬಹುದು. ಇಂತಹ ಕ್ರೋಡೀಕರಣವು 'ಒಂದು ತರಗತಿ–ಒಬ್ಬ ಶಿಕ್ಷಕ' ಮಾದರಿಯನ್ನು ಸದ್ಯದಲ್ಲಿಯೇ ಸಾಧಿಸಲು ದೇಶವನ್ನು ಸಜ್ಜುಗೊಳಿಸುತ್ತದೆ" (ಪು. ೨೦). ಚರ್ಚೆ: "ಶಿಕ್ಷಣ ಹಕ್ಕು ಕಾಯ್ದೆಯ ನಿಬಂಧನೆಗಳನ್ನು ಸಡಿಲಿಸದೆಯೇ" ಎಂಬುದನ್ನು ನಾವಿಲ್ಲಿ ಗಮನಿಸಬೇಕು. ಶಿಕ್ಷಕ ಹಾಗು ಶಾಲಾ ಸಂಪನ್ಮೂಲಗಳನ್ನು ಕಡಿತಗೊಳಿಸುವ ಮೂಲಕ ಪರಿಣಾಮಕಾರಿಯನ್ನಾಗಿಸುವ ಪ್ರಚಲಿತ ಪ್ರಯಾಸವನ್ನು ಗಮನಿಸಿದರೆ ಇದು ಶಿಕ್ಷಣ ಹಕ್ಕು ಕಾಯ್ದೆಯ ಆದರ್ಶಗಳಿಗೆ ಅಡ್ಡಿಮಾಡುತ್ತಿರುವುದು ಕಾಣುತ್ತಿದೆ. ಉದಾಹರಣೆಗೆ, ಸ್ಥಳೀಯ ಶಾಲೆಗಳನ್ನು ಅಲ್ಲಿಂದ ದೂರದ, ಗಾತ್ರದಲ್ಲಿ ಹಿರಿದಾದ ಸಮುದಾಯಗಳಿಗೆ ಸೇವೆ ಒದಗಿಸುತ್ತಿರುವ ಶಾಲೆಗಳೊಂದಿಗೆ ವಿಲೀನಗೊಳಿಸುವುದರಿಂದ ಸ್ಥಳೀಯ ಶಾಲೆಗಳಿಗೆ ಹೋಗುತ್ತಿದ್ದ ಸಣ್ಣ ಹಳ್ಳಿ/ಬುಡಕಟ್ಟು ವಸತಿಯ ಕೆಲವೇ ಮಕ್ಕಳು ಸಂಕಷ್ಟಕ್ಕೆ ಗುರಿಯಾಗುತ್ತಾರೆ. ಅದೇ ರೀತಿ, ಶಿಕ್ಷಣ ಹಕ್ಕು ಕಾಯ್ದೆಯ ಆದರ್ಶವು ಸೂಚಿತ ಕನಿಷ್ಠವಷ್ಟೇ ಎಂಬುದನ್ನು ನೆನಪಿಡಬೇಕು. ಸರ್ಕಾರದ ಪ್ರಯಾಸವಾದರೋ, ಶಿಕ್ಷಣ ಹಕ್ಕು ಕಾಯ್ದೆಯ ಆದರ್ಶಗಳು ನನಸಾದರೆ ಗೊತ್ತುಮಾಡಿದ ಗರಿಷ್ಠವನ್ನು ಮುಟ್ಟಿದಂತೆಯೆ ಎಂಬ ರೀತಿ ಇರುತ್ತದೆ. ವಿಶೇಷವಾಗಿ, ಶಿಕ್ಷಕರ ನೇಮಕಾತಿ ಹಾಗು ನಿಯೋಜನೆಗೆ ಸಂಬಂಧಿಸಿದಂತೆ ಇದು ಸತ್ಯ (ಒಟ್ಟು ಸರಾಸರಿ ವಿದ್ಯಾರ್ಥಿ–ಶಿಕ್ಷಕ ಅನುಪಾತಗಳು ಶಿಕ್ಷಣ ಹಕ್ಕು ಕಾಯ್ದೆಯ ಆದರ್ಶಗಳಿಗೆ ವಿಧೇಯರಾಗಿರುವುದರ ಮಾದರಿಮಟ್ಟವೇ ಆಗುತ್ತಿದೆ).
೮. "ಸರ್ಕಾರದ ಪ್ರಯಾಸವು ಶಿಕ್ಷಣ ಹಕ್ಕು ಕಾಯ್ದೆಯನ್ನು ಒಂದು ಸೂಕ್ತ ವಯೋಮಿತಿಯವರೆಗೆ ವಿಸ್ತರಿಸಿ ಅದು ಮಾಧ್ಯಮಿಕ ಶಾಲಾಹಂತಕ್ಕೂ ಅನ್ವಯವಾಗುವಂತೆ ಮಾಡುವುದೇ ಆಗಿದೆ" (ಪು. ೨೦).
ಚರ್ಚೆ: ಇದೊಂದು ಸ್ವಾಗತಾರ್ಹ ಹೆಜ್ಜೆಯಾಗಿದ್ದರೂ, ಉದ್ದೇಶಿತ ವಿಸ್ತರಣೆಯು ಮಾಧ್ಯಮಿಕ ಶಾಲಾಹಂತವನ್ನಷ್ಟೇ ಅಲ್ಲದೆ ಶಾಲಾಪೂರ್ವ ಹಂತದ ಶಿಕ್ಷಣಕ್ಕೂ ಅನ್ವಯವಾಗಬೇಕಿದ್ದು, ಶಿಕ್ಷಣ ಹಕ್ಕು ಕಾಯ್ದೆಯ ತಿದ್ದುಪಡಿ ರೂಪದ ಅಧಿಕೃತ ಆದೇಶವಾಗಿದ್ದು, ಕಾನೂನು ಬದ್ಧವಾಗಿರಬೇಕು (ಕೇವಲ ಪ್ರಯಾಸವಾಗಿರಬಾರದು).

೯. ಶಿಕ್ಷಕರ ವಿಕಾಸ ಹಾಗು ನಿರ್ವಹಣೆ (ಪು. ೨೮–೩೦).
ಚರ್ಚೆ: ಒಟ್ಟಿನಲ್ಲಿ ಸಲಹೆಗಳೇನೋ ಗುಣಾತ್ಮಕವಾಗಿ ತೋರುತ್ತವೆ. ಆದಾಗ್ಯೂ, ನೀತಿಯು ಸದ್ಯದ ವಿರೋಧಾಭಾಸಗಳನ್ನು ಸ್ಪಷ್ಟವಾಗಿ ಗಮನಿಸಿ ಅವುಗಳನ್ನು ಪರಿಹರಿಸಲು ಪ್ರಯತ್ನಿಸಬೇಕು. ಉದಾಹರಣೆಗೆ, ಶಿಕ್ಷಕರ ಅರ್ಹತಾ ನಿಯಂತ್ರಣದ ವಿಚಾರವನ್ನೇ ತೆಗೆದುಕೊಳ್ಳೋಣ. ಶಿಕ್ಷಣದ ಗುಣಮಟ್ಟವನ್ನು ಕಾಯ್ದುಕೊಳ್ಳುವ ಹಾಗು ವಿದ್ಯಾರ್ಥಿಗಳ ಹಿತರಕ್ಷಣೆಯ ಉದ್ದೇಶವನ್ನು ಗಮನದಲ್ಲಿರಿಸಿ ಸರ್ಕಾರವು ಶಿಕ್ಷಕರ ಶಿಕ್ಷಣದ ರಾಷ್ಟ್ರೀಯ ಪರಿಷತ್ತಿಗೆ ೧ರಿಂದ ೮ನೇ ತರಗತಿಯವರೆಗೆ ಶಿಕ್ಷಕರಾಗಿ ನೇಮಕಾತಿಗೆ ಅರ್ಹರಿರುವ ವ್ಯಕ್ತಿಗಳ ವಿಷಯದಲ್ಲಿ ಕನಿಷ್ಠ ಅರ್ಹತಾ ಮಾನದಂಡವನ್ನು ನಿಗದಿಪಡಿಸುವ ಅಧಿಕಾರ ನೀಡಿದೆ. ಶಿಕ್ಷಕರ ಕನಿಷ್ಠ ಗುಣಮಟ್ಟ ಕಾಯ್ದುಕೊಳ್ಳಲು ಹಾಗು ಬೋಧನೆಯ ಗುಣಮಟ್ಟಗಳಿಗೆ ಅವರು ಕಡ್ಡಾಯವಾಗಿ ಬದ್ಧರಾಗಿರುವಂತೆ ನೋಡಿಕೊಳ್ಳಲು ಈ ಮಾನದಂಡಗಳನ್ನು ಪ್ರಕಟಿಸಲಾಗುತ್ತದೆ. ಈ ಪರಿಷತ್ತು ಖಾಸಗಿ ಹಾಗು ಸರ್ಕಾರಿ ಶಾಲೆಗಳೆರಡರಲ್ಲೂ ಶಿಕ್ಷಕರ ವಿದ್ಯಾರ್ಹತೆಯ ಮಾನದಂಡವನ್ನು ನಿಯಂತ್ರಿಸುತ್ತದೆ. ಆದಾಗ್ಯೂ, ಸರ್ಕಾರಿ ಸಂಸ್ಥೆಗಳಲ್ಲಿ ಈ ಶಿಕ್ಷಕರ ಅರ್ಹತೆಯ ಮಾನದಂಡಗಳನ್ನು ಪರಿಶೀಲಿಸಿದರೆ, ಬೇರೆಯೇ ಆದ ಚಿತ್ರಣ ಹೊರಹೊಮ್ಮುತ್ತದೆ. ತಮ್ಮ ರಾಜ್ಯಗಳಲ್ಲಿ ಶಿಕ್ಷಕರ ತರಬೇತಿಗೆ ಸೌಕರ್ಯಗಳಿಲ್ಲ ಎಂಬ ಕಾರಣಕ್ಕೆ ಶಿಕ್ಷಣ ಹಕ್ಕು ಕಾಯ್ದೆಯು ರಾಜ್ಯ ಸರ್ಕಾರಗಳಿಗೆ ಯೋಗ್ಯ ಶಿಕ್ಷಕರನ್ನು ನೇಮಿಸಿಕೊಳ್ಳುವ ವಿಚಾರದಲ್ಲಿ ವಿನಾಯಿತಿ ಕೇಳಲು ಅನುವು ಮಾಡಿಕೊಡುತ್ತದೆ. ಈ ಒಂದು ಬಾರಿ ಮಾತ್ರ ನೀಡಲಾಗುವ ವಿನಾಯಿತಿಯು ರಾಜ್ಯಗಳಿಗೆ ಐದು ವರ್ಷಗಳಿಗೂ ಹೆಚ್ಚು ಕಾಲ ಪರಿಷತ್ತು ನಿಗದಿಪಡಿಸಿದ ಶಿಕ್ಷಕರ ವಿದ್ಯಾರ್ಹತೆಗಳನ್ನು ಸಡಿಲಗೊಳಿಸಲು ಆಸ್ಪದವೀಯುತ್ತದೆ. ಈ ಸಡಿಲಿಕೆಯ ಪ್ರಯೋಜನ ಪಡೆದ ಅನೇಕ ರಾಜ್ಯಗಳಲ್ಲಿ ವಿಸ್ತರಣೆಯ ಕಾಲವು ಕೊನೆಗೊಂಡಿದ್ದರೂ ಪರಿಷತ್ತು ವಿಧಿಸುವ ಶಿಕ್ಷಕರ ವಿದ್ಯಾರ್ಹತೆಯ ಮಾನದಂಡಗಳನ್ನು ಅವು ಪಾಲಿಸುತ್ತಿಲ್ಲ. ಉದಾಹರಣೆಗೆ, ಕಳಪೆ ಮಟ್ಟದ ಶಿಕ್ಷಕರ ತರಬೇತಿ ಸೌಲಭ್ಯವಿರುವ ರಾಜ್ಯ ಸರ್ಕಾರಗಳ ಆತಂಕಗಳಿಗೆ ಯಾವುದೇ ನಿರ್ಬಂಧವಿಲ್ಲದೇ ಸಹಾನುಭೂತಿ ತೋರಲಾಗುತ್ತದೆಯೋ, ಅಂತೆಯೇ ರಾಜ್ಯ ಸರ್ಕಾರಗಳ ಅನರ್ಹ ಶಿಕ್ಷಕರ ನೇಮಕಾತಿಯ ನಿರ್ಧಾರಗಳನ್ನೂ ಒಪ್ಪಿಕೊಳ್ಳಲಾಗುತ್ತಿದೆ. ಹೀಗಾಗಿ, "ಸರ್ಕಾರಿ ಸಂಸ್ಥೆಗಳಲ್ಲಿ ನಿಯಂತ್ರಣ" ಎಂಬುದು ಪರಿಷತ್ತಿಗೆ ಒಂದು ಸವಾಲಾಗಿಯೇ ಉಳಿಯುತ್ತದೆ. ಆದ್ದರಿಂದ ಪರಿಷತ್ತು ರಾಜ್ಯ ಸರ್ಕಾರಗಳನ್ನು ನಿಯಂತ್ರಿಸಲು ಅಸಮರ್ಥವಾಗಿ, ತಾನು ಎತ್ತಿಹಿಡಿಯಬೇಕಿರುವ ಶಿಕ್ಷಣದ ವಿಶಾಲ ಸಾರ್ವಜನಿಕ ಗುರಿಗಳ ಔನ್ನತ್ಯವನ್ನು ತಗ್ಗಿಸಬೇಕಾಗುತ್ತದೆ.

೧೦. ‘‘ಮಂಜೂರಾದ ಸ್ಥಾನಗಳಿಗೆ ಅರ್ಹ ಶಿಕ್ಷಕರನ್ನು ನೇಮಿಸಿಕೊಳ್ಳುವ ಮೂಲಕ ಒಪ್ಪಂದದ ಮೇರೆಗಿನ ಶಿಕ್ಷಕರ ನೇಮಕಾತಿಯನ್ನು ಕ್ರಮೇಣ ಕಡಿಮೆ ಮಾಡಲಾಗುವುದು’’ (ಪು. ೨೯).

ಚರ್ಚೆ: ಹಲವು ರಾಜ್ಯಗಳಲ್ಲಿ ಒಪ್ಪಂದದ ಮೇರೆಗೆ ಶಿಕ್ಷಕರ ನೇಮಕಾತಿಯನ್ನು ಶಿಕ್ಷಕರ ಸಂಘಟನೆಗಳು ‘‘ಸಮಾನ ಕೆಲಸಕ್ಕೆ ಸಮಾನ ಸಂಬಳ’’ ಎಂಬ ತತ್ತ್ವದ ಆಧಾರದ ಮೇಲೆ ಪ್ರತಿಭಟಿಸಿವೆ. ಒಪ್ಪಂದದ ನೇಮಕಾತಿಗಳನ್ನು ಮುಂದುವರಿಸುವುದರಿಂದ ಶಿಕ್ಷಕರ ನಡುವೆ ಹೇಗೆ ಅತೃಪ್ತಿಯ ಕಿಡಿಯೊಡೆಯುತ್ತವೆ ಎನ್ನುವುದನ್ನು ಗೋವಿಂದ ಮತ್ತು ಜೋಸೆಫೀನ್ (೨೦೦೪) ಚರ್ಚಿಸುತ್ತಾರೆ. ಇದು ಅವರ ಕೆಲಸದ ಮೇಲೆ ದುಷ್ಪರಿಣಾಮ ಬೀರುವ ಸಾಧ್ಯತೆಗಳಿವೆ. ಒಪ್ಪಂದದ ನೇಮಕಾತಿಗಳನ್ನು ಕ್ರಮೇಣ ಕಡಿಮೆಮಾಡಲು ಬದ್ಧವಾಗಿದೆಯೆಂದು ಹೇಳುವ ಕೇಂದ್ರ ಸರ್ಕಾರವು ಇದುವರೆಗೂ ರಾಜ್ಯ ಸರ್ಕಾರಗಳೇ ಸಾಮಾನ್ಯವಾಗಿ ನಿರ್ಧರಿಸುತ್ತಿದ್ದ ವಿಚಾರವೊಂದರಲ್ಲಿ ಒಂದು ಗುಣಾತ್ಮಕ ಶಿಫಾರಸು ಮಾಡಿದೆ ಎಂದೇ ಹೇಳಬೇಕು.

೧೧. ಶಾಲೆಗಳ ಮೌಲ್ಯಾಂಕ ಹಾಗು ನಿರ್ವಹಣೆ (ಪು. ೩೨–೩೩).

ಚರ್ಚೆ: ಸಮುದಾಯ/ಬಳಗಗಳ ಪಾಲ್ಗೊಳ್ಳುವಿಕೆ ಹಾಗು ಪೋಷಕರ ತೊಡಗಿಸಿಕೊಳ್ಳುವಿಕೆಯ ಮೂಲಕ ಕೆಳಗಿನಿಂದ ಆರಂಭವಾಗುವ ಬಾಧ್ಯತೆಯ ವಿಧಾನಗಳಿಗೆ ಒತ್ತುನೀಡಿರುವುದು ಶ್ಲಾಘನೀಯ. ಆದರೂ, ಕೆಳಮುಖವಾಗಿ ಸರಿಯುವ ಹೊಣೆಗಾರಿಕೆಯು ಇನ್ನೂ ಉತ್ತಮವಾಗಬೇಕಿದ್ದರೆ ಈ ಪ್ರಕ್ರಿಯೆಯು ಅಸ್ತಿತ್ವದಲ್ಲಿರುವ ಸಾಂಸ್ಥಿಕ ವ್ಯವಸ್ಥೆಯ ಸಾಮರ್ಥ್ಯವನ್ನು ಬಲಪಡಿಸುವ ಪ್ರಕ್ರಿಯೆಯೊಂದಿಗೆ ಜೊತೆಜೊತೆಯಾಗಿ ಸಾಗಬೇಕು ಎನ್ನುತ್ತದೆ ಸದ್ಯದ ಸಂಶೋಧನೆ. ತನ್ನ ಸಾಂಸ್ಥಿಕ ವ್ಯವಸ್ಥೆಯನ್ನು ಹೊಣೆಗಾರನನ್ನಾಗಿ ಮಾಡಬಯಸುವ ಸಂವೇದನಾಶೀಲ ಅಧಿಕಾರಿವರ್ಗದ ಪ್ರಯತ್ನಗಳಿಗೆ ಸಾಮಾಜಿಕ ಲೆಕ್ಕಪರಿಶೋಧನೆ ಅಥವಾ ಇನ್ನಾವುದೇ ಮೇಲ್ಮುಖವಾಗಿ ಸಾಗುವ ಹೊಣೆಗಾರಿಕೆ ವಿಧಾನಗಳು ಹೊಂದಿಕೊಳ್ಳದೇ ಹೋದಾಗ ಅವು ಬಯಸಿದಷ್ಟು ಪರಿಣಾಮಕಾರಿಯಾಗದೇ ಹೋಗುತ್ತವೆ ಎಂದು ಅಧ್ಯಯನಗಳು ಹೊರಗೆಡಹುವ ತಥ್ಯಗಳೂ ಮೇಲೆ ಹೇಳಿರುವುದನ್ನೇ ಬೆಂಬಲಿಸುತ್ತದೆ. ಇದೇ ರೀತಿ, ಸ್ಥಳೀಯ ಸಂಸ್ಥೆಗಳಿಗೆ ಸಮಯಕ್ಕೆ ತಕ್ಕಂತೆ ಬಂಡವಾಳವು ಹರಿದು ಬರುವಂತಹ ಆಂತರಿಕ ಪ್ರಕ್ರಿಯೆಗಳಿಗೆ ಒತ್ತು ನೀಡುವ ಅಗತ್ಯವೂ ಇದೆ (ಇದಕ್ಕಾಗಿ, ಬಾಧ್ಯತೆಯ ಉಪಕ್ರಮಗಳ ಬಗ್ಗೆ ನೀತಿ ಸೂಚನೆಗಳನ್ನು ನೋಡಿ). ‘‘ಶಾಲಾ ಅಭಿವೃದ್ಧಿ ಯೋಜನೆ’’ಯನ್ನು ಪರಿಣಾಮಕಾರಿಯಾಗಿ ಕಾರ್ಯಗತಗೊಳಿಸಲು ‘‘ಶಾಲಾ ನಿರ್ವಹಣಾ ಸಮಿತಿ’’ಯ ತರಬೇತಿಗೆ ಅನುದಾನವನ್ನು ಹೆಚ್ಚಿಸುವ ಪ್ರಯತ್ನವನ್ನು ರಾಜ್ಯ ಸರ್ಕಾರಗಳು ಕೈಗೊಂಡು ಶಾಲೆಗಳಿಗೆ ಸಮಯಾನುಚಿತವಾಗಿ ಅನುದಾನಗಳು ದೊರೆಯುತ್ತವೆ ಎಂಬುದನ್ನು ಖಾತ್ರಿಪಡಿಸುತ್ತವೆ. ಶಾಲಾ ಅಭಿವೃದ್ಧಿ ಯೋಜನೆಗಳನ್ನು ಆಯವ್ಯಯ ಅಂದಾಜಿನ ಹಾಗು ಯೋಜನಾ ಪ್ರಕ್ರಿಯೆಗಳೊಡನೆ ಜಿಲ್ಲಾ ಹಂತದಲ್ಲಿ ಸಂಘಟಿಸಲಾಗುತ್ತದೆ’’ (ಪು. ೩೩): ಇದಕ್ಕಾಗಿ ಸರ್ವಶಿಕ್ಷಾ ಅಭಿಯಾನಕ್ಕಾಗಿ ವಾರ್ಷಿಕ ಕಾರ್ಯಯೋಜನೆ ಹಾಗು ಆಯವ್ಯಯ ಅಂದಾಜನ್ನು ಮಾಡುವ ವಿಧಾನದಲ್ಲಿ ಮೂಲಭೂತವಾಗಿ ಮರುಸಂಘಟಿಸುವ ಅಗತ್ಯವಿದೆ. ಈ ಆಯವ್ಯಯ ಅಂದಾಜು ಎಂಬುದು ಕೇಂದ್ರೀಕೃತ ಮಾನದಂಡಗಳ ಮೇರೆಗೆ ಕೆಳಮುಖವಾಗಿ ಸರಿಯುವ ಮಾದರಿಯ ಪ್ರಕ್ರಿಯೆಯಾಗಿದ್ದು, ಆಚರಣೆಯಲ್ಲಿ ಸ್ಥಳೀಯ ಸಮಸ್ಯೆಗಳಿಗೆ ಸ್ಪಂದಿಸುವ ಹಾಗು ಮೇಲ್ಮುಖವಾಗಿ ಸಾಗುವ ಯೋಜನಾ ಕ್ರಿಯೆಗೆ ಆಸ್ಪದ ನೀಡುವುದಿಲ್ಲ.

೧೨. ‘‘ಶಿಕ್ಷಣ ವಲಯದಲ್ಲಿ ಒಟ್ಟು ದೇಸೀಯ ಉತ್ಪನ್ನದ, ಕಡಿಮೆ ಎಂದರೂ, ಶೇಕಡಾ ೬ರಷ್ಟನ್ನು ತೊಡಗಿಸುವ ಬಹುಕಾಲದಿಂದ ಕಾರ್ಯಸಾಧ್ಯವಾಗದ ಗುರಿಯನ್ನು ತಲುಪಲು ಸರ್ಕಾರವು ಆದ್ಯತೆ ನೀಡಿ, ಅದಕ್ಕಾಗಿ ಕ್ರಮಗಳನ್ನು ತೆಗೆದುಕೊಳ್ಳುತ್ತದೆ’’ (ಪು. ೪೧).

ಚರ್ಚೆ: ಇದೊಂದು ದೀರ್ಘಕಾಲಿಕ ಅಗತ್ಯವಾಗಿದ್ದು ೧೯೬೪–೬೬ರ ಕೊಠಾರಿ ಮಂಡಳಿ ಶಿಫಾರಸಿನ ಕಾಲದಿಂದ ಹಿಡಿದು ಅನಂತರ ೧೯೬೮, ೧೯೮೬, ೧೯೯೨ರಲ್ಲಿ ಬಂದ ಎಲ್ಲಾ ರಾಷ್ಟ್ರೀಯ ಶಿಕ್ಷಣನೀತಿಗಳು ಇದನ್ನು ಗುರುತಿಸಿದ್ದರೂ, ಇನ್ನೂ ಕಾರ್ಯಗತವಾಗಿಲ್ಲ. ‘‘ಕಡಿಮೆ ಎಂದರೆ’’, ‘‘ಆದ್ಯತೆ’’ ಎಂಬ ಪದಗುಚ್ಛಗಳು ಭರವಸೆಯನ್ನು ಇನ್ನೂ ಜೀವಂತವಾಗಿರಿಸಿವೆ. ಟಿ.ಎಸ್.ಆರ್. ಸುಬ್ರಹ್ಮಣ್ಯಮ್ ವರದಿಯ ಆಧಾರದ ಮೇಲೆ ಮಾನವ ಸಂಪನ್ಮೂಲ ಸಚಿವಾಲಯವು ತಯಾರಿಸಿರುವ ‘‘ನೂತನ ರಾಷ್ಟ್ರೀಯ ಶಿಕ್ಷಣನೀತಿ ಕರಡಿಗೆ ಕೆಲವು ಒಳಸುರಿಗಳು’’ ಎಂಬ ಟಿಪ್ಪಣಿರೂಪದ ಕಡತವು ಶೀಘ್ರದಲ್ಲೇ ತಯಾರಾಗಲಿರುವ ನೀತಿಗೆ ‘‘ಒಳಸುರಿ’’ಯೇ ಆಗುವುದಾದರೆ

ಇಲ್ಲಿನ ಮುಖ್ಯ ಸಲಹೆಗಳು ನಮ್ಮ ಕಾಲದ ಪ್ರಧಾನ ಶೈಕ್ಷಣಿಕ ಕಾಳಜಿಗಳಾದ ಅವಕಾಶ, ಗುಣಮಟ್ಟ, ಸಾಮರ್ಥ್ಯ ಹಾಗು ಬಾಧ್ಯತೆಗಳ ವಿಚಾರವಾಗಿ ಹೇಗೆ ಕೊಡುಗೆ ನೀಡಲಿದೆ ಎಂಬುದರ ಮರುಪರಿಶೀಲನೆಯು ಮಹತ್ತ್ವದ್ದಾಗುತ್ತದೆ.

**ಟಿಪ್ಪಣಿ**: ಎಲ್ಲಾ ಪುಟಸಂಖ್ಯೆಗಳೂ, ಅನ್ಯಥಾ ಹೇಳದಿದ್ದಲ್ಲಿ, "ರಾಷ್ಟ್ರೀಯ ನೀತಿ ಕರಡಿಗೆ ಕೆಲವು ಒಳಸುರಿಗಳು" ಕಡತವನ್ನು ಉದ್ಧರಿಸುತ್ತವೆ.

**ಅರ್ಚನಾ ಮೆಹೆಂದಳೆ** ಅವರು ಮುಂಬೈನ ಟಾಟಾ ಸಮಾಜ ವಿಜ್ಞಾನಗಳ ಸಂಸ್ಥೆಯ "ಶಿಕ್ಷಣದಲ್ಲಿ ಆವಿಷ್ಕಾರ ಹಾಗು ಕ್ರಿಯಾತ್ಮಕತೆ ಸಂಶೋಧನಾ ಕೇಂದ್ರ"ದ ಪ್ರಾಧ್ಯಾಪಕರಾಗಿದ್ದಾರೆ. ಅವರನ್ನು archana.mehendale@tiss.edu ಮೂಲಕ ಸಂಪರ್ಕಿಸಬಹುದು.

**ರಾಹುಲ್ ಮುಖೋಪಾಧ್ಯಾಯ** ಅವರು ಬೆಂಗಳೂರಿನ ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿದ್ದಾರೆ. ಶಿಕ್ಷಣದ ಸಮಾಜಶಾಸ್ತ್ರ, ಶಿಕ್ಷಣನೀತಿ ಹಾಗು ಸಂಸ್ಥೆಗಳ ಸಮಾಜಶಾಸ್ತ್ರ, ಅವರ ಸಂಶೋಧನಾಸಕ್ತಿಗಳು. ಅವರನ್ನು rahul.mukhopadhyay@apu.edu.in ಮೂಲಕ ಸಂಪರ್ಕಿಸಬಹುದು.

ಅನುವಾದ : ಕುಶಾಲ್ ಬಿ.ಎಸ್
ಪರಿಶೀಲನೆ : ಚಂದ್ರಶೇಖರ್ ಮಂಡೆಕೋಲು